# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 737
ಸದಸ್ಯರ ಹೆಸರು : ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 17.09.2021
ಉತ್ತರಿಸುವವರು : ಮಾನ್ಯ ರೇಷ್ಮೆ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

<table>
<tr><th></th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ</td><td>ರೇಷ್ಮೆ ಇಲಾಖೆಯಲ್ಲಿ ಮಂಜೂರಾಗಿರುವ ಒಟ್ಟು ಹುದ್ದೆಗಳೆಷ್ಟು; (ವಿವರ ಒದಗಿಸುವುದು)</td><td>ರೇಷ್ಮೆ ಇಲಾಖೆಯಲ್ಲಿ ಒಟ್ಟು 4299 ಹುದ್ದೆಗಳು ಮಂಜೂರಾಗಿರುತ್ತವೆ. ವಿವರ ಕೆಳಕಂಡಂತಿದೆ.<br>
<table>
<tr><th>ಕ್ರ ಸಂ</th><th>ಗ್ರೂಪ್</th><th>ಮಂಜೂರಾದ ಹುದ್ದೆಗಳಸಂಖ್ಯೆ</th></tr>
<tr><td>1</td><td>ಗ್ರೂಪ್ ಎ</td><td>84</td></tr>
<tr><td>2</td><td>ಗ್ರೂಪ್ ಬಿ</td><td>489</td></tr>
<tr><td>3</td><td>ಗ್ರೂಪ್ ಸಿ</td><td>3182</td></tr>
<tr><td>4</td><td>ಗ್ರೂಪ್ ಡಿ</td><td>544</td></tr>
<tr><td colspan="2">ಒಟ್ಟು</td><td>4299</td></tr>
</table></td></tr>
<tr><td>ಆ</td><td>ಇವುಗಳಲ್ಲಿ ಭರ್ತಿಯಾದ ಹುದ್ದೆಗಳೆಷ್ಟು; ಖಾಲಿ ಹುದ್ದೆಗಳೆಷ್ಟು; (ವಿವರ ಒದಗಿಸುವುದು)</td><td>ರೇಷ್ಮೆ ಇಲಾಖೆಯಲ್ಲಿ ಪ್ರಸ್ತುತ ಒಟ್ಟು 1598 ಹುದ್ದೆಗಳು ಭರ್ತಿಯಾಗಿದ್ದು, 2701 ಹುದ್ದೆಗಳು ಖಾಲಿ ಇರುತ್ತವೆ. ವಿವರ ಕೆಳಕಂಡಂತಿದೆ.<br>
<table>
<tr><th>ಕ್ರ ಸಂ</th><th>ಗ್ರೂಪ್</th><th>ಭರ್ತಿಯಾದ ಹುದ್ದೆಗಳ ಸಂಖ್ಯೆ</th><th>ಖಾಲಿ ಇರುವ ಹುದ್ದೆಗಳ ಸಂಖ್ಯೆ</th></tr>
<tr><td>1</td><td>ಗ್ರೂಪ್ ಎ</td><td>50</td><td>34</td></tr>
<tr><td>2</td><td>ಗ್ರೂಪ್ ಬಿ</td><td>256</td><td>233</td></tr>
<tr><td>3</td><td>ಗ್ರೂಪ್ ಸಿ</td><td>1018</td><td>2164</td></tr>
<tr><td>4</td><td>ಗ್ರೂಪ್ ಡಿ</td><td>274</td><td>270</td></tr>
<tr><td colspan="2">ಒಟ್ಟು</td><td>1598</td><td>2701</td></tr>
</table></td></tr>
<tr><td>ಇ</td><td>ಖಾಲಿ ಹುದ್ದೆಗಳನ್ನು ಭರ್ತಿ ಮಾಡಲಾಗುವುದು ಯಾವಾಗ; (ವಿವರ ಒದಗಿಸುವುದು)</td><td>ರೇಷ್ಮೆ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಪೈಕಿ 145 - ರೇಷ್ಮೆ ನಿರೀಕ್ಷಕರ ಹುದ್ದೆಗಳನ್ನು, 309 - ರೇಷ್ಮೆ ಪ್ರದರ್ಶಕರ ಹುದ್ದೆಗಳನ್ನು, 279 - ರೇಷ್ಮೆ ಪ್ರವರ್ತಕರ ಹುದ್ದೆಗಳನ್ನು ಅಂದರೆ ಒಟ್ಟು 733 ತಾಂತ್ರಿಕ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡುವ ಪ್ರಕ್ರಿಯೆಯು ಚಾಲನೆಯಲ್ಲಿರುತ್ತದೆ.</td></tr>
</table>

...2/-

| | | |
|---|---|---|
| ಈ | ರೈತರಿಗೆ ಸೂಕ್ತ ವೈಜ್ಞಾನಿಕ ಸಲಹೆಗಳನ್ನು ನೀಡಲು ಇಲಾಖೆ ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | ರೇಷ್ಮೆ ಇಲಾಖೆಯ ಕ್ಷೇತ್ರಮಟ್ಟದ ಎಲ್ಲಾ ಕಛೇರಿಗಳಲ್ಲಿ ರೇಷ್ಮೆ ಬೆಳೆಗಾರರಿಗೆ ಇಲಾಖೆಯಿಂದ ದೊರೆಯುವ ಸಹಾಯಧನ/ಪ್ರೋತ್ಸಾಹಧನ ವಿವರಗಳನ್ನು ಹಾಗೂ ರೇಷ್ಮೆ ಪದ್ಧತಿಯನ್ನು ಅಳವಡಿಸಿಕೊಳ್ಳಲು ತಾಂತ್ರಿಕ ಮಾಹಿತಿಗಳನ್ನು ಪ್ರದರ್ಶಿಸಲಾಗಿದೆ. ಹೊಸ ತಾಂತ್ರಿಕತೆ ಮತ್ತು ನೂತನ ಆವಿಷ್ಕಾರಗಳ ಬಗ್ಗೆ ಕರಪತ್ರ, ಬ್ರೋಚರ್ ಮತ್ತು ಭಿತ್ತಿ ಪತ್ರಗಳ ಮೂಲಕ ರೇಷ್ಮೆ ಬೆಳೆಗಾರರಿಗೆ ಮಾಹಿತಿ ನೀಡಲಾಗುತ್ತಿದೆ. ರೇಷ್ಮೆ ಬೆಳೆಗಾರರ ಹಿಪ್ಪುನೇರಳೆ ತೋಟ ಹಾಗೂ ರೇಷ್ಮೆ ಹುಳು ಸಾಕಾಣಿಕೆಯ ವೀಕ್ಷಣೆ ಸಮಯದಲ್ಲಿ ಅವಶ್ಯ ತಾಂತ್ರಿಕ ಸಲಹೆಗಳನ್ನು ನೀಡಲಾಗುತ್ತಿದೆ. ಅಲ್ಲದೇ ರೇಷ್ಮೆ ಬೆಳೆಗಾರರಿಗೆ ಕ್ಷೇತ್ರಮಟ್ಟದಲ್ಲಿ ನೂತನ ತಾಂತ್ರಿಕತೆಗಳ ಬಗ್ಗೆ ಕಾರ್ಯಾಗಾರ, ಕ್ಷೇತ್ರೋತ್ಸವಗಳು, ವಸ್ತು ಪ್ರದರ್ಶನ, ಗ್ರಾಮಮಟ್ಟದಲ್ಲಿ ರೈತರಿಂದ ರೈತರಿಗೆ ತರಬೇತಿ, ರೇಷ್ಮೆ ತರಬೇತಿ ಸಂಸ್ಥೆಗಳಿಂದ ಕ್ಷೇತ್ರಮಟ್ಟದಲ್ಲಿ ರೈತರಿಗೆ ಒಂದು ದಿನ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸಿ ರೇಷ್ಮೆ ಬೆಳೆಗಾರರಲ್ಲಿ ತಾಂತ್ರಿಕ ಅರಿವು ಮೂಡಿಸಲಾಗುತ್ತಿದೆ. ದೂರದರ್ಶನ ಹಾಗೂ ರೇಡಿಯೋ ಮೂಲಕ ವಿಜ್ಞಾನಿಗಳು, ತಾಂತ್ರಿಕ ಅಧಿಕಾರಿಗಳು ಚರ್ಚೆಗಳಲ್ಲಿ ಭಾಗವಹಿಸಿ ಅಗತ್ಯ ತಾಂತ್ರಿಕ ಮಾಹಿತಿಯನ್ನು ರೇಷ್ಮೆ ಬೆಳೆಗಾರರಿಗೆ ನೀಡುತ್ತಿದ್ದಾರೆ. |

**ಸಂಖ್ಯೆ: ರೇಷ್ಮೆ 100 ರೇಸೇವಿ 2021**

**(ಡಾ. ನಾರಾಯಣ ಗೌಡ)**
ರೇಷ್ಮೆ ಹಾಗೂ ಯುವಸಬಲೀಕರಣ
ಮತ್ತು ಕ್ರೀಡಾ ಸಚಿವರು